# ತರಗತಿಯಲ್ಲಿ ಒಂದು ಪುಸ್ತಕದ ಮೂಲೆ

**ಶಹನಾಜ್ ಡಿ.ಕೆ.**

ಶಿಕ್ಷಕಿಯಾಗಿ ನಾನು ಒಂದು ಖಾಸಗಿ ಶಾಲೆಯನ್ನು ಸೇರಿದಾಗ ನನಗೆ ನನ್ನ ತರಗತಿಯಲ್ಲಿನ ಮಕ್ಕಳಿಗೆ ಪಾಠ ಹೇಳುವುದು ನಿಜಕ್ಕೂ ಆನಂದದಾಯಕವಾಗಿತ್ತು. ನಾನು ಬೋಧಿಸುತ್ತಿದ್ದ ಪಾಠಗಳನ್ನು ಮಕ್ಕಳು ತುಂಬ ಚೆನ್ನಾಗಿ ಅರ್ಥಮಾಡಿಕೊಂಡಿದ್ದಾರೆ ಎಂದು ನಾನು ಸದಾ ಕಾಲವು ಭಾವಿಸಿದ್ದೆ. ಏಕೆಂದರೆ ಅವರೆಲ್ಲರೂ ಪರೀಕ್ಷೆಯಲ್ಲಿ ಉತ್ತಮ ಅಂಕಗಳನ್ನು ಸಂಪಾದಿಸಿಕೊಳ್ಳುತ್ತಿದ್ದರು. ಬೋಧಿಸುತ್ತಿದ್ದದ್ದು ಖಾಸಗಿ ಶಾಲೆಯಾಗಿದ್ದು, ಅಲ್ಲಿಗೆ ಬರುವ ಎಲ್ಲ ಮಕ್ಕಳು ಸಹ ತುಂಬ ಸುಶಿಕ್ಷಿತ ಕುಟುಂಬಗಳಿಂದ ಬರುತ್ತಿದ್ದುದರಿಂದ ಹಾಗಿತ್ತೇನೋ. ಅಲ್ಲಿ ಕೆಲವು ವರ್ಷಗಳ ಕಾಲ ಕೆಲಸ ಮಾಡಿದ ಮೇಲೆ ನಾನು ಸರ್ಕಾರದಿಂದ ಅನುದಾನವನ್ನು ಪಡೆದುಕೊಳ್ಳುತ್ತಿದ್ದ ಮತ್ತು ತುಂಬ ವಿಭಿನ್ನವಾದ ಹಿನ್ನೆಲೆಯಿಂದ ಬರುವ ಮಕ್ಕಳಿದ್ದ ಶಾಲೆಯೊಂದಕ್ಕೆ ಹೋಗಿ ಸೇರಿಕೊಂಡೆ.

ಸ್ವಲ್ಪ ಕಾಲದಲ್ಲಿಯೇ, ಆ ಮಕ್ಕಳು ಒಂದೋ ನಾನು ಬೋಧಿಸುತ್ತಿದ್ದುದನ್ನು ಸರಿಯಾಗಿ ಅರ್ಥ ಮಾಡಿಕೊಳ್ಳುತ್ತಿರಲಿಲ್ಲ ಅಥವಾ ಪರೀಕ್ಷೆಗೆ ಚೆನ್ನಾಗಿ ತಯಾರಾಗುತ್ತಿರಲಿಲ್ಲ ಎಂಬುದು ನನಗೆ ಮನವರಿಕೆಯಾಯಿತು. ನಾನು ಅವರಿಗೆ ಪರೀಕ್ಷೆಗಳಿಗೆ ಮುನ್ನ ಸಣ್ಣ ಪರೀಕ್ಷೆಗಳನ್ನು ಕೊಡಲಾರಂಬಿಸಿದೆ ಮತ್ತು ಇಡಿಯ ಪಠ್ಯ ವಸ್ತುವನ್ನು ಪುನರಾವರ್ತಿಸಿದೆ ಆದರೆ ಅವರ ಫಲಿತಾಂಶವು ಉತ್ತಮವಾಗಲಿಲ್ಲ. ಕೆಲವು ವರ್ಷಗಳು ಉರುಳಿ ಹೋದವು, ಆದರೂ ಅವರ ಕಡಮೆ ಮಟ್ಟದ ಸಾಧನೆಗೆ ಕಾರಣಗಳೇನು ಎಂಬುದನ್ನು ನನಗೆ ಆಗಲೂ ಕಂಡುಕೊಳ್ಳಲಾಗಲಿಲ್ಲ.

ಕಾಲಕ್ರಮೇಣ ಅವರ ಸಮಸ್ಯೆಯ ಕಾರಣ ನನಗೆ ಅರ್ಥವಾಯಿತು: ಆ ಮಕ್ಕಳು ಐದನೆಯ ತರಗತಿಗೆ ಬಂದಾಗಲೂ ಸಹ ಅವರಿಗೆ ಸರಿಯಾಗಿ ಓದುವುದು ತಿಳಿದಿರಲಿಲ್ಲ ಎಂಬುದು ನನಗೆ ಮನವರಿಕೆಯಾಯಿತು. ಇದರ ಅರ್ಥವೇನೆಂದರೆ ಅವರಿಗೆ ಏನನ್ನು ಕಲಿಸಲಾಗುತ್ತಿತ್ತೋ ಅದು ಅವರಿಗೆ ಅರ್ಥವಾಗುತ್ತಿರಲಿಲ್ಲ ಮತ್ತು ಅವರು ಅದನ್ನು ನೆನಪಿನಲ್ಲಿಟ್ಟುಕೊಳ್ಳುತ್ತಿರಲಿಲ್ಲ. ಓದುವ ಕೌಶಲ್ಯ ದುರ್ಬಲವಾಗಿದ್ದ ಮಕ್ಕಳಿಗೆ ನಾನು ಪ್ರತಿದಿನವೂ ಒಂದು ಪುಟದಷ್ಟು ಓದಲು ಹೇಳಿದೆ ಮತ್ತು ಮಾರನೆಯ ದಿನ ಅವರು ಅದನ್ನು ನನ್ನ ಮುಂದೆ ಓದಬೇಕೆಂದು ಹೇಳಿದೆ. ಆದರೆ ಅವರು ಹೊಸಪುಟವೊಂದನ್ನು ಓದುವಾಗ ನಿಧಾನವಾಗಿಬಿಡುತ್ತಿದ್ದರು. ತಾವು ಓದಿದ ವಾಕ್ಯವೊಂದರ ಅರ್ಥವನ್ನು ಹೇಳಲು ಅವರು ಸಮರ್ಥರಾಗಿರಲಿಲ್ಲ.

ನಾನು ಇದೇ ಕಾರ್ಯತಂತ್ರವನ್ನು ಮುಂದುವರಿಸಿದೆ. ಆದರೆ ಅವರು ಒಂದು ಪುಟವನ್ನು ಓದುವಂತೆ ಮಾಡಿದ್ದು ಅವರಿಗೆ ನಿಜಕ್ಕೂ ಸಹಾಯವಾಗುತ್ತಿರಲಿಲ್ಲ ಎಂದು ನನಗೆ ಗೊತ್ತಾಯಿತು. ಏಕೆಂದರೆ ಅವರಿಗೆ ತಮ್ಮನ್ನು ಬಲವಂತದಿಂದ ಓದಿಸಲಾಗುತ್ತಿದೆ ಎನಿಸಿತ್ತು. ಬದಲಿಗೆ ಅವರು ಓದುತ್ತಾ ಇದ್ದದ್ದು ಆಸಕ್ತಿಯುತವಾಗಿದ್ದರೆ ಮತ್ತು ವಿನೋದದಿಂದ ಕೂಡಿದ್ದರೆ ಅವರು ಯಾರೂ ಹೇಳದೆಯೇ ಅದನ್ನು ಓದಬಹುದು. ಅಷ್ಟು ಹೊತ್ತಿಗೆ ನನಗೆ ತಿಳಿದುಬಂದದ್ದೇನೆಂದರೆ ಅವರಿಗೆ ಮನೆಯಲ್ಲಿ ಓದಲು ಇದ್ದದ್ದು ಕೇವಲ ಪಠ್ಯಪುಸ್ತಕಗಳು ಮತ್ತು ಇನ್ನಾವುದೇ ಓದುವ ಸಾಮಗ್ರಿ ಇರಲಿಲ್ಲ. ಆ ಮಕ್ಕಳಿಗೆ ಪುಸ್ತಕಗಳನ್ನು ಕೊಡಿಸಬೇಕೆಂದು ನಾನು ಗ್ರಂಥಾಲಯಕ್ಕೆ ಹೋದಾಗ ಮಕ್ಕಳು ಪುಸ್ತಕಗಳನ್ನು ಹರಿಯುತ್ತಾರೆಂದೂ, ಆದ್ದರಿಂದ ಅವರಿಗೆ ಯಾವುದೇ ಪುಸ್ತಕಗಳನ್ನು ಕೊಡಲಾಗುವುದಿಲ್ಲವೆಂದೂ, ನನಗೆ ತಿಳಿಸಿದರು! ನಾನು ನನ್ನ ಮನೆಯಿಂದ ಕೆಲವು ಹಳೆಯ ಪುಸ್ತಕಗಳನ್ನು ತೆಗೆದುಕೊಂಡು ಹೋಗಿ ಆ ಮಕ್ಕಳಿಗೆ ಕೊಟ್ಟೆನು ಮತ್ತು ಅಂತಹ ಪುಸ್ತಕಗಳನ್ನು ಇಲ್ಲಿಯವರೆಗೂ ನೋಡಿರದಿದ್ದ ಅವರು ಅವುಗಳನ್ನು ಓದುವುದರಲ್ಲಿ ಖುಷಿ ಪಟ್ಟರು. ಯಾರಿಗೆ ಓದುವುದು ಬರುತ್ತಿರಲಿಲ್ಲವೋ ಅವರು ಸಹ ಪುಸ್ತಕದ ಹಾಳೆಗಳನ್ನು ತಿರುವಿ ಹಾಕಲಾರಂಭಿಸಿದರು. ಆಗ ನನಗೆ ಒಂದು ಗ್ರಂಥಾಲಯವನ್ನು ಆರಂಭಿಸಬೇಕು ಅಥವಾ ತರಗತಿಯಲ್ಲಿ ಒಂದು ಪುಸ್ತಕ ಮೂಲೆಯನ್ನು ತೆರೆಯಬೇಕು ಎಂಬ ವಿಚಾರ ಮೂಡಿ ಬಂತು.

ಶಾಲೆಯ ಗ್ರಂಥಾಲಯದಿಂದ ನಾನು ತೆಗೆದುಕೊಂಡದ್ದು ಹಳೆಯ ಪುಸ್ತಕಗಳಾಗಿದ್ದು ಅವುಗಳನ್ನು ನಿರುಪಯುಕ್ತ ಎಂದು ಮಾರಬೇಕಾಗಿತ್ತು ಹಾಗಾಗಿ ನಾನು ಅದನ್ನು ಹಿಂತಿರುಗಿಸಬೇಕಾಗಿರಲಿಲ್ಲ. ನಂದನ, ಚಂಪಕ, ಬಾಲಹಂಸ ಮುಂತಾದ ಈ ಪತ್ರಿಕೆಗಳಲ್ಲಿ ಸಣ್ಣ ಕಥೆಗಳಿದ್ದು ಅವೇ ನನ್ನ ತರಗತಿ ಗ್ರಂಥಾಲಯದ ಮೊದಲ ಪುಸ್ತಕಗಳಾಗಿದ್ದವು. ನಾನು ಈ ಪುಸ್ತಕಗಳನ್ನು ತರಗತಿಯ ಕಪಾಟಿನಲ್ಲಿಟ್ಟು ಮಕ್ಕಳಿಗೆ ಬೇಕಾದ ಪುಸ್ತಕಗಳನ್ನು ಆಯ್ದುಕೊಂಡು ಓದಲು ಸ್ವಾತಂತ್ರ್ಯ ನೀಡಿದೆ. ಒಂದೇ ನಿಬಂಧನೆ ಎಂದರೆ ಅವರು ತಮ್ಮ ತರಗತಿಯ ಕೆಲಸವನ್ನು ಮೊದಲು ಮುಗಿಸಬೇಕು ಮತ್ತು ಬಿಡುವಿನ ವೇಳೆಯಲ್ಲಿ ಓದಬೇಕು.

ಆರಂಭದಲ್ಲಿ ಕೆಲವೊಂದು ತೊಡಕುಗಳಿದ್ದವು. ಆದರೆ ಕ್ರಮೇಣ ಮಕ್ಕಳು ಒಂದು ಸಂಘಟಿತ ರೀತಿಯಲ್ಲಿ ಅವುಗಳನ್ನು ತರಗತಿಯಲ್ಲಿ ಓದಲಾರಂಭಿಸಿದರು. ಗ್ರಂಥಾಲಯದಲ್ಲಿದ್ದ ಪುಸ್ತಕಗಳ ಸಂಖ್ಯೆ ಕಡಮೆಯಾಗುತ್ತಾ ಹೋಯಿತು ಇದರ ಅರ್ಥ ಏನೆಂದರೆ ಮಕ್ಕಳು ಅವುಗಳನ್ನು ಓದಲು ಮನೆಗೆ ತೆಗೆದುಕೊಂಡು ಹೋಗುತ್ತಿದ್ದರು.

ಯಾವ ಮಗು ಓದುತ್ತಿದೆ, ಯಾವ ಮಗುವಿನ ಆಸಕ್ತಿ ಹೆಚ್ಚಾಗುತ್ತಿದೆ ಮತ್ತು ದುರ್ಬಲ ಓದುವ ಕೌಶಲ್ಯಗಳಿರುವ ಮಕ್ಕಳು ಏನು ಮಾಡುತ್ತಿದ್ದಾರೆ ಎಂಬುದನ್ನು ಗಮನಿಸಬೇಕು ಎಂಬ ಆವಶ್ಯಕತೆ ನನಗೆ ಈಗ ಮನವರಿಕೆಯಾಯಿತು. ಈ ಹೊತ್ತಿಗೆ ತರಗತಿಯಲ್ಲಿ ಪುಸ್ತಕಗಳನ್ನು ಇಟ್ಟು ಎರಡು-ಮೂರು ತಿಂಗಳಾಗಿತ್ತು. ಆದರೆ ಈಗಲೂ ಕೂಡ ದುರ್ಬಲವಾದ ಓದುವ ಕೌಶಲ್ಯಗಳಿದ್ದ ಮಕ್ಕಳು ಕೇವಲ ಚಿತ್ರಗಳನ್ನಷ್ಟೇ ನೋಡುತ್ತಿದ್ದರು. ಯಾವಾಗ ಈ ಮಕ್ಕಳಿಗೆ ಪದಗಳನ್ನು ಗುರುತಿಸುವುದು ಮತ್ತು ಓದುವುದು ಸಾಧ್ಯವಾಯಿತೋ, ಆಗ ನನಗೆ ಎಲ್ಲವೂ ಸರಿಯಾದ ದಿಕ್ಕಿನಲ್ಲಿ ಸಾಗುತ್ತಿದೆ ಮತ್ತು ಮಕ್ಕಳಿಗೆ ಓದಲು ಆಸಕ್ತಿದಾಯಕವಾದದ್ದು ದೊರೆತರೆ ಅವರಿಗೆ ಪರೀಕ್ಷೆಯ ಆತಂಕವನ್ನು ಮೀರಿ ಓದುವುದರಲ್ಲಿ ಆನಂದವನ್ನು ಕಾಣುವುದು ಸಾಧ್ಯ ಎಂದೆನಿಸಿ, ನನಗೆ ಪ್ರೋತ್ಸಾಹ ಸಿಕ್ಕಿದಂತಾಯಿತು.

ವರ್ಷವಿಡೀ ತರಗತಿಯಲ್ಲಿ ಓದಲು ಮಕ್ಕಳಿಗೆ ಬಹಳಷ್ಟು ಸ್ವಾತಂತ್ರ್ಯವನ್ನು ನೀಡಲಾಯಿತು ಮತ್ತು ಅವರು ತಮ್ಮ ಸಹಪಾಠಿಗಳ ನೆರವಿನೊಂದಿಗೆ ಚೆನ್ನಾಗಿ ಓದುವುದನ್ನು ಕಲಿತರು. ಅವರ ಓದುವ ವೇಗವೂ ಸ್ವಲ್ಪ ಉತ್ತಮವಾದ ಮೇಲೆ ಅವರ ತಿಳಿವಳಿಕೆಯನ್ನು ಪರೀಕ್ಷಿಸಲು ಇಡೀ ತರಗತಿಗೆ ಒಂದು ಕ್ಲೋಸ್ ಪರೀಕ್ಷೆಯನ್ನು (ಒಂದು ಪ್ಯಾರಾದಲ್ಲಿ ಖಾಲಿ ಇರುವ ಜಾಗವನ್ನು ಸೂಕ್ತ ಪದಗಳಿಂದ ಭರ್ತಿ ಮಾಡುವುದು) ನಡೆಸಲಾಯಿತು. ಅವರಿಗೆ ಹೇಳಿಕೆ ಲೆಕ್ಕಗಳು ಇರುವ ಗಣಿತದ ಪರೀಕ್ಷೆಯನ್ನೂ ಕೊಡಲಾಯಿತು. ಅವರಿಗೆ ಓದಿ ಅರ್ಥ ಮಾಡಿಕೊಳ್ಳಲು ಸಾಧ್ಯವಾಗುತ್ತಿದೆಯೇ ಮತ್ತು ಅರ್ಥಮಾಡಿಕೊಂಡಿದ್ದರ ಆಧಾರದ ಮೇಲೆ ಪ್ರಶ್ನೆಗಳನ್ನು ಉತ್ತರಿಸಲಾಗುತ್ತಿದೆಯೇ ಎಂಬುದನ್ನು ಕಂಡುಕೊಳ್ಳಲಾಗುವಂತೆ ಈ ಎರಡೂ ಪರೀಕ್ಷೆಗಳನ್ನು ಯೋಜಿಸಲಾಗಿತ್ತು. ಈ ಎರಡು ಪರೀಕ್ಷೆಗಳ ಫಲಿತಾಂಶಗಳು ಧನಾತ್ಮಕವಾಗಿದ್ದವು. ಹೀಗಾಗಿ ಸುಮಾರು ನಾಲ್ಕೈದು ವರ್ಷಗಳಿಂದಲೂ ತಮ್ಮ ಪಠ್ಯಪುಸ್ತಕಗಳ ಸಹಾಯದಿಂದ ಓದಲಾಗದಿದ್ದ ಹುಡುಗರು, ತಮಗೆ ಇಷ್ಟ ಬಂದ ಪುಸ್ತಕಗಳನ್ನು ಸ್ವಂತ ಪ್ರಯತ್ನದ ಮೂಲಕವೇ ಓದಲು ಕಲಿತು ಯಶಸ್ವಿಯಾಗಿದ್ದರು ಎಂಬುದು ಸ್ಪಷ್ಟವಾಯಿತು. ಓದಿದ್ದನ್ನು ಅವರು ಅರ್ಥ ಮಾಡಿಕೊಳ್ಳುತ್ತಿದ್ದಾರೆ ಎಂಬುದು ಸಹ ಸ್ಪಷ್ಟವಾಯಿತು.

ಈ ಪ್ರಯೋಗದ ಯಶಸ್ಸಿನಿಂದಾಗಿ ಶಾಲೆಯ ಎಲ್ಲ ತರಗತಿ ಕೊಠಡಿಗಳಲ್ಲೂ ಕೂಡ ಒಂದು ಪುಸ್ತಕದ ಮೂಲೆಯನ್ನು ಆರಂಭಿಸಲಾಗಿದೆ. ಶಿಕ್ಷಕರು ಮಕ್ಕಳ ಮಟ್ಟಕ್ಕೆ ಅನುಗುಣವಾಗಿ ಮತ್ತು ವಿದ್ಯಾರ್ಥಿಗಳ ಆಸಕ್ತಿಗೆ ಅನುಗುಣವಾಗಿ ಪುಸ್ತಕಗಳನ್ನು ಆಯ್ಕೆ ಮಾಡಿ, ಗ್ರಂಥಾಲಯದಿಂದ ತಂದು ತರಗತಿಯಲ್ಲಿ ಇರಿಸಿಕೊಂಡಿರುತ್ತಾರೆ. ಮಕ್ಕಳು ಬಿಡುವಿನ ಸಮಯ ಸಿಕ್ಕಿದಾಗ ಅವುಗಳನ್ನು ಉಪಯೋಗಿಸುತ್ತಾರೆ. ಮಕ್ಕಳು ವಿಭಿನ್ನ ರೀತಿಯ ಪುಸ್ತಕಗಳನ್ನು ಓದಲು ಅವಕಾಶ ಸಿಗುವಂತೆ ಮತ್ತು ಹೆಚ್ಚು ಕಲಿಯಲು ಅವಕಾಶ ದೊರಕುವಂತೆ ಕಾಲದಿಂದ ಕಾಲಕ್ಕೆ ಈ ಪುಸ್ತಕಗಳನ್ನು ಬದಲಾಯಿಸಲಾಗುತ್ತದೆ. ಕ್ರಮೇಣ ಮಕ್ಕಳು ಬೇರೆ ಬೇರೆ ಕಾರ್ಯಕ್ರಮಗಳಿಗೆ ಮತ್ತು ಸ್ಪರ್ಧೆಗಳಿಗೆ ಗ್ರಂಥಾಲಯವನ್ನು ಉಪಯೋಗಿಸಲು ಆರಂಭಿಸಿದರು. ಇದು ಪುಸ್ತಕಗಳಲ್ಲಿನ ಅವರ ಆಸಕ್ತಿಯನ್ನು ಹೆಚ್ಚಿಸಿತು ಮತ್ತು ಪರೀಕ್ಷೆಯ ಫಲಿತಾಂಶದ ಮೇಲೂ ಇದರ ಪ್ರಭಾವ ಕಾಣಿಸಲಾರಂಭಿಸಿತು.

ಕೆಲವು ವರ್ಷಗಳ ಅನಂತರ ನಾನು ಬೋಧನೆಗೆಂದು ಸರ್ಕಾರಿ ಶಾಲೆಯೊಂದಕ್ಕೆ ಹೋದೆನು. ಅಲ್ಲಿಯೂ ಸಹ ಐದರಿಂದ ಎಂಟನೆಯ ತರಗತಿಯಲ್ಲಿದ್ದ ಮಕ್ಕಳು ಬಹಳ ದುರ್ಬಲವಾದ ಓದುವ ಕೌಶಲ್ಯಗಳನ್ನು ಹೊಂದಿದ್ದರು. ಅಲ್ಲಿಯೂ ಸಹ ನಾನು ಗ್ರಂಥಪಾಲಕರೊಂದಿಗೆ ಮಾತನಾಡಿ ಮಕ್ಕಳ ಮಟ್ಟಕ್ಕೆ ಅನುಗುಣವಾಗಿ ಅವರಿಗೆ ಪುಸ್ತಕಗಳು ದೊರಕುವಂತೆ ನೋಡಿಕೊಂಡು ಅವರ ಸಮಸ್ಯೆಯನ್ನು ನಿವಾರಿಸಿ ಮಕ್ಕಳಿಗೆ ಓದುವುದರಲ್ಲಿ ನೆರವು ನೀಡಿದೆ.

ಜಗತ್ತಿನ ಬಗ್ಗೆ ಮಕ್ಕಳು ತಿಳಿದುಕೊಳ್ಳಲು ನೆರವಾಗುವುದು ಮತ್ತು ಪಠ್ಯಪುಸ್ತಕಗಳು ಹಾಗೂ ತರಗತಿಗಳ ಆಚೆ ಅವರ ಜ್ಞಾನವು ವಿಸ್ತರಿಸುವಂತೆ ನೋಡಿಕೊಳ್ಳುವುದು ಪುಸ್ತಕ ಮೂಲೆಯ ಹಿಂದಿರುವ ಪರಿಕಲ್ಪನೆ. ಬೇರೆ ಪುಸ್ತಕಗಳನ್ನು ಓದುವುದರಿಂದ ತಮ್ಮ ಸುತ್ತಲಿನ ಜಗತ್ತನ್ನು ಅರ್ಥ ಮಾಡಿಕೊಳ್ಳಲು ತಮಗೆ ಬೇಕೆಂದಾಗ ಈ ಕೌಶಲ್ಯವನ್ನು ಉಪಯೋಗಿಸಬಹುದು ಎಂಬುದು ಅವರಿಗೆ ಮನವರಿಕೆಯಾಗುತ್ತದೆ.

ಶಹನಾಜ್ ಡಿ.ಕೆ ಅವರು ಕಳೆದ 25 ವರ್ಷಗಳಿಂದಲೂ ಶಿಕ್ಷಕಿಯಾಗಿದ್ದಾರೆ ಮತ್ತು ಈಗ ಅವರು ಉದಯಪುರದ, ಗೋಡುಂಡದಲ್ಲಿನ ಸರ್ಕಾರಿ ವಿದ್ಯಾರ್ಥಿನಿಯರ ಹಿರಿಯ ಮಾಧ್ಯಮಿಕ ಶಾಲೆಯಲ್ಲಿ ಆರರಿಂದ ಎಂಟನೇ ತರಗತಿಗೆ ವಿಜ್ಞಾನ ಮತ್ತು ಗಣಿತವನ್ನು ಬೋಧಿಸುತ್ತಿದ್ದಾರೆ. ವಿದ್ಯಾರ್ಥಿಗಳ ಬೋಧನೆ - ಕಲಿಕೆಯ ಪ್ರಕ್ರಿಯೆಯನ್ನು ಗ್ರಹಿಸುವುದು ಅವರ ಆಸಕ್ತಿಯ ವಿಷಯ. ಅವರನ್ನು ಸಂಪರ್ಕಿಸಬಹುದು- shehnazakirdk@gmail.com